

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : (335) 273

ಸದಸ್ಯರ ಹೆಸರು : ಶ್ರೀ ವಿಜಯ ಸಿಂಗ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವವರು : ಕಂದಾಯ ಸಚಿವರು

ಉತ್ತರಿಸಬೇಕಾದ ದಿನಾಂಕ : 17.07.2019

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೀದರ್ ಜಿಲ್ಲೆಯಲ್ಲಿ ಮುಂಗಾರು ಆರಂಭವಾಗಿ ಐದು ವಾರಗಳಾದರೂ ನಿರೀಕ್ಷಿತ ಪ್ರಮಾಣದಲ್ಲಿ ಮಳೆಯಾಗದೆ ಶೇ.50 ರಷ್ಟು ರೈತರು ಇನ್ನೂ ಬಿತ್ತನೆ ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ |
| ಆ | ಜಿಲ್ಲೆಯಲ್ಲಿ ಬರ ಪರಿಸ್ಥಿತಿ ನಿರ್ಮಾಣವಾಗಿದ್ದು, ಸರ್ಕಾರವು ಕೈಗೊಂಡ ಪರಿಹಾರ ಕ್ರಮಗಳು ಯಾವುವು? | 2018-19ನೇ ಸಾಲಿನಲ್ಲಿ ಬರ ಪರಿಹಾರಕ್ಕಾಗಿ ಬೀದರ್ ಜಿಲ್ಲೆಗೆ ರೂ.10.00 ಕೋಟಿಗಳ ಅನುದಾನ ಬಿಡುಗಡೆ ಮಾಡಲಾಗಿದೆ. ತಾಲ್ಲೂಕು ಮಟ್ಟದ ಟಾಸ್ಕ್ ಫೋರ್ಸ್ ಅಡಿ ತುರ್ತು ಕುಡಿಯುವ ನೀರಿನ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ರೂ.675.00 ಲಕ್ಷ ಅನುಮೋದಿಸಿದ್ದು, ರೂ.462.50 ಲಕ್ಷ ಅನುದಾನ ಬಿಡುಗಡೆಗೊಳಿಸಿದೆ. ಈ ಪೈಕಿ ರೂ.430.10 ಲಕ್ಷ ವೆಚ್ಚವಾಗಿರುತ್ತದೆ.<br>**2018-19ನೇ** ಸಾಲಿನಲ್ಲಿ MGNREGA ಅಡಿ 23.34 ಲಕ್ಷ ಮಾನವ ದಿನಗಳನ್ನು ಸೃಜಿಸಿ 7160.58 ಲಕ್ಷ ವೆಚ್ಚವಾಗಿರುತ್ತದೆ.<br>ಪ್ರಸ್ತುತ ಬೀದರ್ ಜಿಲ್ಲೆಯಲ್ಲಿ 14 ಮೇವಿನ ಬ್ಯಾಂಕ್‌ಗಳನ್ನು ಸ್ಥಾಪಿಸಿ, ಸರ್ಕಾರದಿಂದ ರಿಯಾಯಿತಿ ದರದಲ್ಲಿ ಮೇವನ್ನು ವಿತರಿಸಲಾಗುತ್ತಿದೆ.<br>ಜಿಲ್ಲೆಯ 133 ಗ್ರಾಮಗಳಿಗೆ 134 ಟ್ಯಾಂಕರ್ ಗಳ ಮೂಲಕ ಹಾಗೂ 221 ಗ್ರಾಮಗಳಿಗೆ 314 ಖಾಸಗಿ ಬೋರ್‌ವೆಲ್ ಗಳನ್ನು ಬಾಡಿಗೆ ಆಧಾರದ ಮೇಲೆ ಪಡೆದು ಒಟ್ಟು 354 ಗ್ರಾಮಗಳಿಗೆ ಕುಡಿಯುವ ನೀರು ಸರಬರಾಜು ಮಾಡಲಾಗುತ್ತಿದೆ.<br>ಪ್ರಸಕ್ತ ಸಾಲಿನಲ್ಲಿ ಕೃಷಿ ಪರಿಕರಗಳಾದ ಬಿತ್ತನೆ ಬೀಜ, ಜೈವಿಕ ಗೊಬ್ಬರ, ಕೃಷಿ ಉಪಕರಣಗಳು ಮತ್ತು ಸಸ್ಯ ಸಂರಕ್ಷಣೆಯ ಔಷಧಿಗಳನ್ನು ರೈತರಿಗೆ ರಿಯಾಯಿತಿ ದರದಲ್ಲಿ ವಿತರಿಸಲಾಗುತ್ತಿದೆ. |

ಕಂಇ 41 ಟಿಎನ್‌ಆರ್ 2019

(ಆರ್.ವಿ. ದೇಶಪಾಂಡೆ)
ಕಂದಾಯ ಸಚಿವರು